ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 17 ನೇ ಮಾರ್ಚ್, 2020

ಹಾಸನ ಜಿಲ್ಲೆಯಲ್ಲಿರುವ ಕಲ್ಲು ಕ್ವಾರಿ ಮತ್ತು ಕ್ರಷರ್‌ಗಳ ಬಗ್ಗೆ

ಶ್ರೀ ಎಂ. ಎ. ಗೋಪಾಲಸ್ವಾಮಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

1045 (1240) ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಹಾಸನ ಜಿಲ್ಲೆಯಲ್ಲಿರುವ ಕಲ್ಲು ಕ್ವಾರಿ ಮತ್ತು ಕ್ರಷರ್ಗಳ ತಾಲ್ಲೂಕುವಾರು ವಿವರ ನೀಡುವುದು ; ಕಲ್ಲು ಕ್ವಾರಿ ಮತ್ತು ಕ್ರಷರ್ಗಳಿಗೆ ಅನುಮತಿ ನೀಡಲು ಮತ್ತು ಲೈಸೆನ್ಸ್ ನವೀಕರಣ ಮಾಡಿಕೊಳ್ಳಲು ಸರ್ಕಾರವು ನಿಗದಿಪಡಿಸಿರುವ ಮಾನದಂಡಗಳೇನು ; (ಮಾಹಿತಿ ನೀಡುವುದು)

(ಆ) ಈ ಕಲ್ಲು ಕ್ವಾರಿ ಮತ್ತು ಕ್ರಷರ್ಗಳು ಸರ್ಕಾರದ ಮಾನದಂಡಗಳಂತೆ ಕಾರ್ಯನಿರ್ವಹಿಸುತ್ತಿರುವ ಬಗ್ಗೆ ಯಾರು ಮೇಲ್ವಿಚಾರಣೆ ನಡೆಸುವರು; ಈ ಕಲ್ಲು ಕ್ವಾರಿ ಮತ್ತು ಕ್ರಷರ್ಗಳನ್ನು ಕಾಲ ಕಾಲಕ್ಕೆ ತಪಾಸಣೆ ಮಾಡಿರುವ ತಪಾಸಣಾ ವರದಿಗಳ ವಿವರ ನೀಡುವುದು ;

(ಇ) ಹಾಸನ ಜಿಲ್ಲೆಯಲ್ಲಿರುವ ಕಲ್ಲು ಕ್ವಾರಿ ಮತ್ತು ಕ್ರಷರ್ಗಳಲ್ಲಿ ಕಳೆದ 3 ವರ್ಷಗಳಲ್ಲಿ ನಡೆದಿರುವ ಅವಘಡಗಳ ಬಗ್ಗೆ ಮಾಹಿತಿ ನೀಡುವುದು; ಈ ಕಲ್ಲು ಕ್ವಾರಿ ಮತ್ತು ಕ್ರಷರ್ಗಳ ವಿರುದ್ಧ ಕಳೆದ 3 ವರ್ಷಗಳಲ್ಲಿ ಸಾರ್ವಜನಿಕರಿಂದ ಸ್ವೀಕೃತವಾಗಿರುವ ದೂರು ಅರ್ಜಿಗಳೆಷ್ಟು ; ಈ ದೂರು ಅರ್ಜಿಗಳಿಗೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು ; ತಾಲ್ಲೂಕುವಾರು ಮತ್ತು ಕ್ವಾರಿವಾರು ಮಾಹಿತಿಗಳನ್ನು ನೀಡುವುದು?